ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಶ್ರೇಯೋಭಿವೃದ್ಧಿ ಕುರಿತು

ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

777 (828) ಮಾನ್ಯ ಕಾರ್ಮಿಕ ಹಾಗೂ ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಹಾಸನ ಜಿಲ್ಲೆಯಲ್ಲಿ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಸಂಖ್ಯೆ ಎಷ್ಟು ; ಯಾವ ಯಾವ ಉದ್ಯಮಗಳಲ್ಲಿ ಎಷ್ಟು ಕಾರ್ಮಿಕರು ಕೆಲಸ ಮಾಡುತ್ತಿದ್ದಾರೆ ; (ವಿವರ ನೀಡುವುದು)

(ಆ) ರಾಜ್ಯದ ಯಾವ ಯಾವ ನಗರಗಳಲ್ಲಿ ಇ.ಎಸ್.ಐ ಆಸ್ಪತ್ರೆಗಳಿವೆ; (ವಿವರ ನೀಡುವುದು)

(ಇ) ಸರ್ಕಾರವು ಕಾರ್ಮಿಕರಿಗೆ ನಿಗದಿಪಡಿಸಿರುವ ಮಾಸಿಕ ವೇತನ ಮತ್ತು ಇತರೆ ಭತ್ಯೆಗಳೇನು ಕೆಲಸ ನಿರ್ವಹಿಸುವ ಜಾಗದಲ್ಲಿ ಕಾರ್ಮಿಕರಿಗೆ ಅಪಘಾತವಾಗಿ ಅಂಗವಿಕಲತೆ ಅಥವಾ ಇತರೆ ಅಂಗವೈಫಲ್ಯ ಉಂಟಾದಲ್ಲಿ ಇಂತಹ ಕಾರ್ಮಿಕರಿಗೆ ಸರ್ಕಾರ ಮತ್ತು ಉದ್ಯೋಗದಾತರು ನೀಡುವ ಪರಿಹಾರಗಳೇನು ; (ವಿವರ ನೀಡುವುದು)

(ಈ) ಸರ್ಕಾರವು ಕಾರ್ಮಿಕರ ಶ್ರೇಯೋಭಿವೃದ್ಧಿಗಾಗಿ ಅನುಷ್ಠಾನಗೊಳಿಸಿರುವ ಯೋಜನೆಗಳು ಯಾವುವು ; ಈ ಯೋಜನೆಗಳ ಮಾನದಂಡಗಳೇನು ; ಈ ಯೋಜನೆಗಳಡಿ ಕಳೆದೆರಡು ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿ ಪ್ರಯೋಜನ ಪಡೆದಿರುವ ಕಾರ್ಮಿಕರ ಸಂಖ್ಯೆ ಎಷ್ಟು ? (ತಾಲ್ಲೂಕುವಾರು ಮಾಹಿತಿ ನೀಡುವುದು)